ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಶುಕ್ರವಾರ, ದಿನಾಂಕ: 25ನೇ ಸೆಪ್ಟಂಬರ್, 2020

ಆಹಾರ ಪೂರೈಕೆಯ ಕುರಿತು

ಶ್ರೀ ರಘುನಾಥ್ರಾವ್ ಮಲ್ಕಾಪೂರೆ (ವಿಧಾನಸಭೆಯಿಂದ ಚುನಾಯಿತರಾದವರು):-

677 (701) ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೀದರ್ ಜಿಲ್ಲೆಯಲ್ಲಿರುವ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಗೆ 2017-18ರಿಂದ 2019-20ನೇ ಸಾಲಿನವರೆಗೆ ಅಂಗನವಾಡಿ ಮಕ್ಕಳಿಗೆ ಬಾಣಂತಿಯರಿಗೆ ಗರ್ಭಿಣಿಯರಿಗೆ ನೀಡುವ ಆಹಾರ ಪೂರೈಕೆ ಕುರಿತು ಎಷ್ಟು ಅನುದಾನ ಮಂಜೂರು ಮಾಡಲಾಗಿದೆ; (ತಾಲ್ಲೂಕುವಾರು ಮಾಹಿತಿ ನೀಡುವುದು)

(ಆ) ಈ ಅನುದಾನವನ್ನು ಸಮರ್ಪಕವಾಗಿ ಉಪಯೋಗಿಸಿ ಕೊಳ್ಳಲಾಗಿದೆಯೇ ;

(ಇ) ಆಹಾರ ಪೂರೈಕೆಯನ್ನು ಯಾವ ಯಾವ ಏಜೆನ್ಸಿಯವರಿಗೆ ಗುತ್ತಿಗೆ ನೀಡಲಾಗಿದೆ ; ಗುತ್ತಿಗೆಯ ಕರಾರುಗಳೇನು ; (ಮಾಹಿತಿ ನೀಡುವುದು)

(ಈ) ಆಹಾರ ಪದಾರ್ಥಗಳನ್ನು ಖರೀದಿಸಲು ಇರುವ ಮಾನದಂಡಗಳೇನು ಹಾಗೂ ನಿಯಮಗಳೇನು ; ಖರೀದಿಸಿರುವ ಪ್ರಕರಣಗಳೇನಾದರೂ ಬೆಳಕಿಗೆ ಬಂದಿವೆಯೇ ; ಬಂದಿದ್ದಲ್ಲಿ ಸಂಪೂರ್ಣ ಮಾಹಿತಿ ನೀಡುವುದು ?